# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 723

ಸದಸ್ಯರ ಹೆಸರು : ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 17-09-2021.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ತಮ್ಮ ಗ್ರಾಮಗಳ ಅಭಿವೃದ್ಧಿ ಮತ್ತು ಇತರೆ ಕೆಲಸ ಕಾರ್ಯಗಳ ನಿಮಿತ್ತ ಸರ್ಕಾರಿ ಕಛೇರಿಗಳಿಗೆ ಓಡಾಡುವ ಅವಶ್ಯಕತೆ ಇರುವ ಹಿನ್ನೆಲೆಯಲ್ಲಿ ಸದರಿಯವರಿಗೆ ಓಡಾಡಲು ಅನುಕೂಲವಾಗುವಂತೆ ಉಚಿತ ಬಸ್ ಪಾಸ್ ನೀಡುವ ಕುರಿತಂತೆ ಸರ್ಕಾರದ ಸ್ಪಷ್ಟ ನಿಲುವೇನು; | ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ಗ್ರಾಮ ಪಂಚಾಯತಿ ಕೆಲಸದ ನಿಮಿತ್ತ ಓಡಾಡಲು ಅನುಕೂಲವಾಗುವಂತೆ ಉಚಿತ ಬಸ್ ಪಾಸ್ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ.<br><br>ಮುಂದುವರೆದು, ಗ್ರಾಮ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರುಗಳು ಗ್ರಾಮ ಪಂಚಾಯತಿ ಕೆಲಸದ ನಿಮಿತ್ತ ಮಾಡಿದ ಪ್ರಯಾಣಗಳಿಗಾಗಿ ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯತಿ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರುಗಳ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ) ನಿಯಮಗಳು, 1994 ರನ್ವಯ ಪ್ರಯಾಣ ಭತ್ಯೆಯನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. |
| (ಆ) | ಗ್ರಾಮ ಪಂಚಾಯತ್ ಸದಸ್ಯರಿಗೆ ಎಷ್ಟು ವರ್ಷಗಳಿಗೊಮ್ಮೆ ಗೌರವಧನವನ್ನು ಪರಿಷ್ಕರಿಸಲಾಗುತ್ತದೆ; ಗೌರವಧನವನ್ನು ಹೆಚ್ಚಿಸುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇದೆಯೇ; ಈ ಕುರಿತು ಸರ್ಕಾರದ ನಿಲುವೇನು; | ಗ್ರಾಮ ಪಂಚಾಯತಿ ಸದಸ್ಯರಿಗೆ ಗೌರವ ಧನವನ್ನು ಪರಿಷ್ಕರಣೆ ಮಾಡಲು ನಿರ್ದಿಷ್ಟ ಕಾಲಮಿತಿ ನಿಗಧಿಪಡಿಸಿರುವುದಿಲ್ಲ.<br><br>ದಿನಾಂಕ:01-04-2017 ರಿಂದ ಜಾರಿಗೆ ಬರುವಂತೆ ಗ್ರಾಮ ಪಂಚಾಯತಿ ಅಧ್ಯಕ್ಷರಿಗೆ ರೂ. 3000 ಉಪಾಧ್ಯಕ್ಷರಿಗೆ ರೂ.2000 ಮತ್ತು ಸದಸ್ಯರಿಗೆ ರೂ.1000 ಗೌರವಧನ ಪರಿಷ್ಕರಣೆ ಮಾಡಿ ನೀಡಲಾಗುತ್ತಿದೆ.<br><br>ಗೌರವಧನವನ್ನು ಹೆಚ್ಚಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |
| (ಇ) | ಗ್ರಾಮ ಪಂಚಾಯತ್ ಸದಸ್ಯರಿಗೆ ಪಿಂಚಣಿ ನೀಡುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇದೆಯೇ; ಈ ಕುರಿತು ಸರ್ಕಾರದ ನಿಲುವೇನು? | ಗ್ರಾಮ ಪಂಚಾಯತ್ ಸದಸ್ಯರಿಗೆ ಪಿಂಚಣಿ ನೀಡುವ ಪ್ರಸ್ತಾವನೆಯು ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |

ಸಂ. ಗ್ರಾಅಪ 337 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.